# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1479 |
| 2 | ಸದಸ್ಯರ ಹೆಸರು | : | ಶ್ರೀ ಲಹರ್ ಸಿಂಗ್ ಸಿರೋಯಾ |
| 3 | ಉತ್ತರಿಸುವ ದಿನಾಂಕ | : | 19-03-2020 |
| 4 | ಉತ್ತರಿಸುವವರು | : | ಮುಖ್ಯಮಂತ್ರಿ |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರ ವ್ಯಾಪ್ತಿಯ ಬಹುತೇಕ ಕಡೆಗಳಲ್ಲಿ ಪಾದಚಾರಿ ರಸ್ತೆಗಳಿಲ್ಲದೆ ಸಾರ್ವಜನಿಕರು ಓಡಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಸಾರ್ವಜನಿಕರಿಗೆ ಆಗುತ್ತಿರುವ ಈ ತೊಂದರೆಯನ್ನು ಸರಿಪಡಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿರುತ್ತದೆ? | ಬೆಂಗಳೂರು ನಗರದಲ್ಲಿ ಪಾದಚಾರಿಗಳ ಸುರಕ್ಷತಾ ಹಿತಾಸಕ್ತಿಗೆ ಸರ್ಕಾರವು ಬೆಂಗಳೂರು ಮಹಾನಗರ ಪಾಲಿಕೆಗೆ ವಿವಿಧ ಯೋಜನೆಗಳ ಅಡಿಯಲ್ಲಿ ಅನುದಾನವನ್ನು ಒದಗಿಸುತ್ತಿದ್ದು, ಪ್ರಮುಖವಾಗಿ ಟೆಂಡರ್ ಶ್ಯೂರ್ ಮತ್ತು ವೈಟ್‌ಟಾಪಿಂಗ್ ಮಾದರಿಯ ರಸ್ತೆಗಳ ನಿರ್ಮಾಣದಲ್ಲಿ ಪಾದಚಾರಿ ಮಾರ್ಗಕ್ಕೆ ಪ್ರಮುಖ ಆದ್ಯತೆ ನೀಡಿದ್ದು, ಈ ರಸ್ತೆ ನಿರ್ಮಾಣದಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಪಾದಚಾರಿ ಮಾರ್ಗಗಳನ್ನು ನಿರ್ಮಿಸಲಾಗುತ್ತಿದೆ.<br><br>ಇದಲ್ಲದೆ, ಇತರೆ ರಸ್ತೆಗಳಲ್ಲಿಯೂ ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುಕೂಲ ಕಲ್ಪಿಸಲು ಉದ್ದೇಶಿಸಿ ಸರ್ಕಾರವು ಈ ಕೆಳಕಂಡ ಆರ್ಥಿಕ ಸಾಲುಗಳಲ್ಲಿ ಪಾದಚಾರಿ ಮಾರ್ಗ ಅಭಿವೃದ್ಧಿಗೆಂದೇ ಅನುದಾನವನ್ನು ಮೀಸಲಿರಿಸಿರುತ್ತದೆ.<br><br>1. 2016-17 ಮತ್ತು 2017-18ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆ ಪಟ್ಟಿಯ ಅನುಬಂಧ-9ರ ಅಡಿಯಲ್ಲಿ ಒಟ್ಟು 37 ಕಾಮಗಾರಿಗಳಿಗೆ ರೂ.75.00 ಕೋಟಿಗಳನ್ನು ನಿಗಧಿಪಡಿಸಿ, ಕಾಮಗಾರಿಗಳನ್ನು ಅನುಷ್ಠಾನ ಗೊಳಿಸಲಾಗಿದೆ. |

| | | |
|---|---|---|
| | | 2. 2017–18ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆ ಪಟ್ಟಿಯ ಅನುಬಂಧ–4ರ ಅಡಿಯಲ್ಲಿ ಒಟ್ಟು 82 ಕಾಮಗಾರಿಗಳಿಗೆ ರೂ.200.00 ಕೋಟಿಗಳನ್ನು ಮತ್ತು ಅನುಬಂಧ–7ರ ಕ್ರಮಸಂಖ್ಯೆ:8ರಲ್ಲಿ ರೂ.18.00 ಕೋಟಿಗಳನ್ನು ನಿಗಧಿಪಡಿಸಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br><br>3. 2019–20ನೇ ಸಾಲಿನ ಮುಖ್ಯಮಂತ್ರಿಗಳ ನವ ನಗರೋತ್ಥಾನ ಯೋಜನೆ ಅಡಿಯಲ್ಲಿ ರಸ್ತೆಗಳ ಅಭಿವೃದ್ಧಿ, ರಸ್ತೆ ಅಗಲೀಕರಣ ಮತ್ತು ಇತರೆ ಯೋಜನೆಗಳಲ್ಲಿ ಮೀಸಲಿರಿಸಿರುವ ಅನುದಾನದಲ್ಲಿಯೂ ಸಹ ರಸ್ತೆ ಅಭಿವೃದ್ಧಿಯೊಂದಿಗೆ ಪಾದಚಾರಿ ಮಾರ್ಗಗಳ ಅಭಿವೃದ್ಧಿಯನ್ನು ಸಹ ಕೈಗೊಳ್ಳಲು ಕ್ರಮವಹಿಸಲಾಗಿರುತ್ತದೆ.<br><br>ವಾಹನ ದಟ್ಟಣೆ ಇರುವ ರಸ್ತೆಗಳಲ್ಲಿ ಪಾದಚಾರಿಗಳು ಸುರಕ್ಷಿತವಾಗಿ ರಸ್ತೆ ದಾಟಲು ಅನುಕೂಲವಾಗುವಂತೆ ಪಾದಚಾರಿ ಮೇಲ್ಸೇತುವೆ ನಿರ್ಮಾಣಕ್ಕೆ ಕ್ರಮವಹಿಸಿದ್ದು, ಈಗಾಗಲೇ ಪಾಲಿಕೆ ವ್ಯಾಪ್ತಿಯಲ್ಲಿ ಸಾರ್ವಜನಿಕರ ಮತ್ತು ಖಾಸಗಿ ಸಹಭಾಗಿತ್ವದಲ್ಲಿ(ಪಿಪಿಪಿ ಮಾದರಿಯಲ್ಲಿ) ಒಟ್ಟು 34 ಪಾದಚಾರಿ ಮೇಲ್ಸೇತುವೆಗಳನ್ನು, ಸರ್ಕಾರದ ಅನುದಾನದಲ್ಲಿ 3 ಪಾದಚಾರಿ ಮೇಲ್ಸೇತುವೆಗಳನ್ನು ಮತ್ತು 19 ಪಾದಚಾರಿ ಕೆಳಸೇತುವೆಗಳನ್ನು ನಗರದಾದ್ಯಂತ ನಿರ್ಮಿಸಿದ್ದು, ಸಾರ್ವಜನಿಕರು ಸುಗಮವಾಗಿ ಸಂಚರಿಸಲು ಅನುಕೂಲ ಕಲ್ಪಿಸಲಾಗಿದೆ.<br><br>ಮುಂದುವರೆದು, ಪ್ರಸ್ತುತ ಸಾರ್ವಜನಿಕರ ಮತ್ತು ಖಾಸಗಿ ಸಹಭಾಗಿತ್ವದಲ್ಲಿ(ಪಿಪಿಪಿ ಮಾದರಿ) 17 ಪಾದಚಾರಿ ಮೇಲ್ಸೇತುವೆಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದು, ಬೆಂಗಳೂರು ನಗರ ಸಂಚಾರಿ ಪೊಲೀಸ್ ಇಲಾಖೆಯ ಸಮನ್ವಯದೊಂದಿಗೆ ಹೆಚ್ಚಿನ ವಾಹನ ದಟ್ಟಣೆ ಇರುವ 123 ಸ್ಥಳಗಳಲ್ಲಿ ಪಾದಚಾರಿ ಮೇಲ್ಸೇತುವೆ ನಿರ್ಮಿಸಲು ಉದ್ದೇಶಿಸಲಾಗಿದೆ. |

| | | |
|---|---|---|
| | | ಪಾದಚಾರಿಗಳು ಸುರಕ್ಷಿತವಾಗಿ ರಸ್ತೆ ದಾಟಲು ಅನುಕೂಲವಾಗುವಂತೆ ಆಯ್ದ ಸ್ಥಳಗಳಲ್ಲಿ ವೈಜ್ಞಾನಿಕ ರಸ್ತೆ ಉಬ್ಬರ, ಎತ್ತರಿಸಿದ ಪಾದಚಾರಿ ದಾಟು ಮಾರ್ಗ, ರಸ್ತೆ ಮಾರ್ಕಿಂಗ್/ಜೀಬ್ರಾ ಕ್ರಾಸಿಂಗ್ ಮಾರ್ಕಿಂಗ್ ಮತ್ತು ಪೆಲಿಕಾನ್ ಸಿಗ್ನಲ್‌ಗಳ ನಿರ್ಮಾಣ ಮತ್ತು ಇತ್ಯಾದಿ ಸುರಕ್ಷತಾ ಕಾಮಗಾರಿಗಳನ್ನು ಸಹ ಕೈಗೊಳ್ಳಲಾಗುತ್ತಿದೆ.<br><br>ವೈಟ್ ಟಾಪಿಂಗ್, ಟೆಂಡರ್ ಶ್ಯೂರ್, ಗ್ರೇಡ್ ಸೆಪರೇಟರ್ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಪಾದಚಾರಿಗಳ ಸುರಕ್ಷತೆಗಾಗಿ ಅಗತ್ಯಕ್ಕೆ ತಕ್ಕಂತೆ ಕನಿಷ್ಠ 2.5 ಮೀ. ಗಳಷ್ಟು ಅಗಲವಿರುವಂತೆ ಹಾಗೂ ಸಮತಟ್ಟು ಇರುವ ಹಾಗೆ ಪಾದಚಾರಿ ಮಾರ್ಗಗಳನ್ನು ನಿರ್ಮಿಸಲಾಗುತ್ತಿದ್ದು, ವಾಹನ ಸವಾರರು ಪಾದಚಾರಿ ಮಾರ್ಗದ ಮೇಲೆ ಓಡಾಡುವುದನ್ನು ನಿರ್ಬಂಧಿಸುವುದಕ್ಕಾಗಿ ಬೊಲಾರ್ಡ್ಸ್ (Bollard) ಗಳನ್ನು ಅಳವಡಿಸಲು, ರಸ್ತೆ ದಾಟಲು Zebra Crossing ಗಳನ್ನು ನಿರ್ಮಿಸಲು ಕ್ರಮ ವಹಿಸಲಾಗುತ್ತಿದೆ. ಅಲ್ಲದೆ, Sign Boards ಗಳನ್ನೂ ಕೂಡ ಅಳವಡಿಸಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: ನಅಇ 90 ಎಂಎನ್‌ಜಿ 2020**

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ